


# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## **ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 09-03-2021 ಪ್ರಶ್ನೆ ಸಂಖ್ಯೆ : 670(854)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎನ್. ಅಪ್ಪಾಜಿಗೌಡ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 09-03-2021

ಉತ್ತರಿಸುವ ಸಚಿವರು: ಮಾನ್ಯ ಸಹಕಾರ ಸಚಿವರು

ವಿಷಯ : ವೃಂದ ಮತ್ತು ನೇಮಕಾತಿ ನಿಯಮವಳಿಗಳನ್ನು 33 ವರ್ಷ ಕಳೆದರೂ ಸಹ ತಿದ್ದುಪಡಿ ಮಾಡದಿರುವ ಬಗ್ಗೆ

(ಅ) ಸಹಕಾರ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿಗೆ ಈ ಹಿಂದೆಯೇ ಡಿ.ಪಿ.ಎ.ಆರ್., ಡಿ.ಪಿ.ಎಲ್ ಮತ್ತು ಹಣಕಾಸು ಇಲಾಖೆಯಿಂದ ಅಭಿಪ್ರಾಯಗಳ ಸಲ್ಲಿಕೆಯಾಗಿದ್ದರೂ ಸಹ ತಿದ್ದುಪಡಿ ಪ್ರಕ್ರಿಯೆಯ ವಿಳಂಬವಾಗಲು ಕಾರಣವೇನು; (ವಿವರ ನೀಡುವುದು)

(ಆ) ಜ್ಯೇಷ್ಠತೆಯಲ್ಲಿ ಹಿರಿಯರಾಗಿರುವ ಸಿ.ಡಿ.ಓ. ಗಳನ್ನು ಕೈಬಿಟ್ಟು ಕಿರಿಯರಾಗಿವವರಿಗೆ ನಿಬಂಧಕರ ಹುದ್ದೆಗೆ ಮುಂಬಡ್ತಿ ನೀಡಿದ್ದು ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರುರವರು ಪದೋನ್ನತಿ ನೀಡಿರುವ ಆದೇಶವನ್ನು ರದ್ದುಪಡಿಸಲು ಸರ್ಕಾರ ಕ್ರಮಕೈಗೊಳ್ಳದಿರಲು ಕಾರಣವೇನು; (ವಿವರ ನೀಡುವುದು)

(ಇ) ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮವಳಿಗಳನ್ನು 33 ವರ್ಷ ಕಳೆದರೂ ಸಹ ತಿದ್ದುಪಡಿ ಮಾಡಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ತಿದ್ದುಪಡಿಯನ್ನು ಯಾವ ಕಾಲಾಮಿತಿಯೊಳಗೆ ಪೂರ್ಣಗೊಳಿಸಲಾಗುವುದು; (ವಿವರ ನೀಡುವುದು)

(ಈ) ದಿನಾಂಕ : 17-08-2017ರ ಕೆ.ಎ.ಟಿ., ಬೆಂಗಳೂರು ಆದೇಶದಂತೆ ಪದೋನ್ನತಿಯಿಂದ ವಂಚಿತರಾಗಿರುವವರಿಗೆ ಪದೋನ್ನತಿ ನೀಡಲು ಸರ್ಕಾರಕ್ಕಿರುವ ತೊಂದರೆಗಳೇನು; (ವಿವರ ನೀಡುವುದು) ಈ ಬಗ್ಗೆ ಸರ್ಕಾರ ಯಾವ ಕ್ರಮಗಳನ್ನು ಕೈಗೊಳ್ಳುವುದು?